

ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 810 |
| ಸದಸ್ಯರ ಹೆಸರು | ಶ್ರೀ ಪ್ರಕಾಶ್ ಕೆ.ರಾಥೋಡ್<br>(ನಾಮನಿರ್ದೇಶನ ಹೊಂದಿದವರು) |
| ಉತ್ತರಿಸಬೇಕಾದ ದಿನಾಂಕ | 09.03.2021 |
| ಉತ್ತರಿಸುವ ಸಚಿವರು | ಗಣಿ ಮತ್ತು ಭೂವಿಜ್ಞಾನ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಚಿಕ್ಕಬಳ್ಳಾಪುರ ಜಿಲ್ಲೆ, ಗುಡಿಬಂಡೆ ತಾಲ್ಲೂಕಿನ ಹಿರೇನಾಗವಲ್ಲಿ ಗ್ರಾಮದಲ್ಲಿ ಜಿಲೆಟಿನ್ ಸ್ಫೋಟದಿಂದ ಆರುಮಂದಿ ಅಮಾಯಕ ಕಾರ್ಮಿಕರು ಅಸುನೀಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿರುತ್ತದೆ. |
| ಆ) | ಜಿಲೆಟಿನ್ ಕಡ್ಡಿಯನ್ನು ಸಂಗ್ರಹಿಸಿಡಲು ಇರುವ ಮಾನದಂಡಗಳೇನು; | ಜಿಲೆಟಿನ್ (ಸ್ಫೋಟಕ ವಸ್ತು) ಸಂಗ್ರಹಿಸಲು ಈ ಕೆಳಕಂಡ ಮಾನದಂಡಗಳನ್ನು ಅನುಸರಿಸಬೇಕಾಗಿರುತ್ತದೆ.<br>1. ಸ್ಫೋಟಕ ವಸ್ತುಗಳ ಸಂಗ್ರಹಣಾ ಘಟಕವನ್ನು ಸ್ಥಾಪಿಸಲು ಜಿಲ್ಲಾಧಿಕಾರಿಗಳ ಎನ್.ಓ.ಸಿ. ಪಡೆಯುವುದು.<br>2. ಪ್ರಧಾನ ಸ್ಫೋಟಕ ನಿಯಂತ್ರಣಾಧಿಕಾರಿಯವರಿಂದ ಅನುಮತಿ ಪಡೆಯುವುದು.<br>3. PESO ರವರ ಅನುಮತಿಗಳು (PESO- Petroleum and Explosive Safety Organization, Ministry of Commerce and Industry, Government of India).<br>4. PESO ರವರಿಂದ ಪರವಾನಗಿ ಪಡೆಯುವುದು.<br>5. ಸ್ಫೋಟಕ ಸಂಗ್ರಹಣಾ ಕೇಂದ್ರದ ಶೇಖರಣಾ ಸಾಮರ್ಥ. ಫಾರಂ ಡಿಇ-2.<br>6. ಸ್ಫೋಟಕ ಸಂಗ್ರಹಣಾ ಕೇಂದ್ರದ ಯೋಜನೆ (Magzine Plan).<br>7. ಸ್ಫೋಟಕ ವಸ್ತುಗಳನ್ನು ಸಾಗಾಣಿಕೆ ಮಾಡುವ ವಾಹನದ ಪರವಾನಗಿ ಮತ್ತು ಯೋಜನೆ. ಫಾರಂ ಎಲ್.ಇ.-07.<br>8. ಕ್ವಾರಿ ಲೀಸ್‌ದಾರರೊಂದಿಗೆ ಮಾಡಿಕೊಂಡಿರುವ ಅಗ್ರಿಮೆಂಟ್.<br>9. DGMS ಅಥವಾ PESO ರವರಿಂದ ನೇಮಕಗೊಂಡ ಶಾಟ್‌ಫೈರರ್ ಮತ್ತು ಬ್ಲಾಸ್ಟರ್‌ಗಳ ವಿವರ.<br>10. ಸ್ಫೋಟಕಗಳ ಸರಬರಾಜು ವಿವರ, ಫಾರಂ ಆರ್‌ಇ-13. |

| | | |
|---|---|---|
| ಇ) | ಪದೇಪದೇ ಈ ರೀತಿಯ ಸ್ಫೋಟಕಗಳು ನಡೆಯುತ್ತಿರುವುದು ಅನಾಹುತಕಾರಿಯಾಗಿದ್ದು ತಪ್ಪಿತಸ್ಥರ ವಿರುದ್ಧ ಸರ್ಕಾರ ಕೈಗೊಂಡಿರುವ ಕ್ರಮಗಳೇನು? | ➢ ಶಿವಮೊಗ್ಗ ತಾಲ್ಲೂಕು, ಕಲ್ಲಗಂಗೂರು ಗ್ರಾಮದಲ್ಲಿ ನಡೆದ ಸ್ಫೋಟಕಕ್ಕೆ ಸಂಬಂಧಿಸಿದಂತೆ, ಮೆ॥ ಎಸ್.ಎಸ್. ಸ್ಟೋನ್ ಕ್ರಷರ್ ಮಾಲೀಕರಾದ ಶ್ರೀ. ಬಿ.ವಿ. ಸುಧಾಕರ್ ಬಿನ್ ವೆಂಕಟರಾವ್ ಇವರ ವಿರುದ್ಧ ಶಿವಮೊಗ್ಗ ಗ್ರಾಮಂತರ ಪೊಲೀಸ್ ಠಾಣೆಯಲ್ಲಿ ಮೊಕದ್ದಮೆ ಸಂ. 24/2021 ಕಲಂ 286, 304 ಐ.ಪಿ.ಸಿ. ಮತ್ತು ಕಲಂ(ಬಿ) Explosive Act, 1884 ಮತ್ತು Explosive Substance Act, 1908 ರ ಕಲಂ 5 ರಡಿ ಪ್ರಕರಣ ದಾಖಲಾಗಿರುತ್ತದೆ.<br>➢ ಚಿಕ್ಕಬಳ್ಳಾಪುರ ತಾಲ್ಲೂಕಿನ ಹಿರೇನಾಗವಲ್ಲಿ ಗ್ರಾಮದಲ್ಲಿ ನಡೆದ ಸ್ಫೋಟಕ ಸಂಬಂಧ ಕಲ್ಲುಗಣಿ ಗುತ್ತಿಗೆ ಹಾಗೂ ಕ್ರಷರ್ ಮಾಲೀಕರ ವಿರುದ್ಧ ಗುಡಿಬಂಡೆ ಪೊಲೀಸ್ ಠಾಣೆಯಲ್ಲಿ ಮೊಕದ್ದಮೆ ಸಂ. 34/2021 ಕಲಂ 286, 304 ಐ.ಪಿ.ಸಿ. ಮತ್ತು ಕಲಂ (ಬಿ) Explosive Act, 1884 ಮತ್ತು Explosive Substance Act, 1908 ರ ಕಲಂ 5 ರಡಿ ದಿನಾಂಕ 23.02.2021ರಂದು ಪ್ರಕರಣ ದಾಖಲಾಗಿರುತ್ತದೆ. |

ಸಂಖ್ಯೆ ಸಿಐ 118 ಎಂಎಂಎನ್ 2021

(ಮುರುಗೇಶ್ ಆರ್. ನಿರಾಣಿ)

ಗಣಿ ಮತ್ತು ಭೂವಿಜ್ಞಾನ ಸಚಿವರು.